# ತರಗತಿಯಲ್ಲಿ ಕ್ಲೋಸ್ಡ್ ಸರ್ಕ್ಯೂಟ್ ಟೆಲಿವಿಷನ್ ಗೆ ಸ್ಥಳವಿಲ್ಲ

ಶೈಕ್ಷಣಿಕ ಸಂಸ್ಥೆಗಳ ವ್ಯವಸ್ಥೆಯ ಸುಧಾರಣೆಗಳ ಅಡಿಯಲ್ಲಿ ಅನೇಕ ಸಂಶೋಧನೆಗಳು ನಡೆಯುತ್ತಿವೆ. ಇವುಗಳಲ್ಲಿ ಹಲವು ಸೌಲಭ್ಯ ಮತ್ತು ಸುರಕ್ಷತೆಗೆ ನೇರವಾಗಿ ಸಂಬಂಧಪಟ್ಟರೆ ಮತ್ತೆ ಕೆಲವು ಮಾನವನ ನಡವಳಿಕೆಯಲ್ಲಿ ಬದಲಾವಣೆಯನ್ನು ಬಯಸುತ್ತವೆ . ಶಾಲೆಗಳಲ್ಲಿ ಸಿಸಿ ಟಿವಿ ಕ್ಯಾಮೆರಾಗಳ ಅಳವಡಿಕೆ ಈ ಸರಣಿಯಲ್ಲಿದೆ.

ಸಿಸಿ ಟಿವಿ ಅಳವಡಿಸುವ ಆಲೋಚನೆ ಕಾರ್ಪೊರೇಟ್( ಪ್ರಪಂಚ)ಜಗತ್ತಿನಿಂದ ಬಂದಿದೆ. ಇದರ ಮೂಲ ಉದ್ದೇಶ ಭದ್ರತೆ ಮತ್ತು ಕಣ್ಗಾವಲು ಎಂದು ಹೇಳಲಾಗುತ್ತಿದೆ. ಕಾರ್ಪೊರೇಟ್ ಜಗತ್ತಿನಲ್ಲಿ, ಕಾರ್ಯಕ್ಷಮತೆ, ಗುಣಮಟ್ಟ, ಪರಿಣಾಮಕಾರಿತ್ವ, ಲೋಪ, ಹೊಣೆಗಾರಿಕೆ ಮತ್ತು ಆದೇಶ ಪಾಲನೆಯಂಥ ವಿಚಾರಗಳು, ನಿರ್ವಹಣೆ ವ್ಯವಸ್ಥೆ ಮತ್ತು ಕಾರ್ಮಿಕ ವರ್ಗದ ನಡುವಿನ ಸಂಬಂಧಗಳ ಕನ್ನಡಕದ ಮೂಲಕ ನೋಡಲಾಗುತ್ತದೆ. ಇದರ ಮೂಲದಲ್ಲಿ ಅಪನಂಬಿಕೆ, ಶೋಷಣೆ, ದೋಷಾರೋಪ ಮತ್ತು ಅಧಿಕಾರಗಳ ಹೋರಾಟವಿದೆ. ಇಂತಹ ಪರಿಸ್ಥಿತಿಯಲ್ಲಿ ಶಾಲೆಗಳಲ್ಲಿ ಸಿಸಿಟಿವಿ ಅಳವಡಿಸುವ ನಿರ್ಧಾರ ಹಲವು ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ.. ಈ ಲೇಖನ ಇಂತಹ ಪ್ರಶ್ನೆಗಳು ಮತ್ತು ಅವುಗಳ ಸೂಚ್ಯಾರ್ಥಗಳನ್ನು ಶಿಕ್ಷಣದ ಶೈಕ್ಷಣಿಕ-ಸಾಮಾಜಿಕ ಸಂಬಂಧಗಳ ಬೆಳಕಿನಲ್ಲಿ (ಕಾಣ)ನೋಡಲು ಪ್ರಯತ್ನಿಸುತ್ತದೆ.

ಇತ್ತೀಚಿನ ದಿನಗಳಲ್ಲಿ ಶಾಲೆಯ ಆವರಣದ ಒಳಗೆ ವಿದ್ಯಾರ್ಥಿಗಳ ಸುರಕ್ಷತೆಯನ್ನು ಖಾತ್ರಿಪಡಿಸುವುದು ಪ್ರಮುಖ ವಿಷಯವಾಗಿ ಹೊರಹೊಮ್ಮಿದೆ. ಇದನ್ನು ಪರಿಹರಿಸುವುದಕ್ಕಾಗಿ ತರಗತಿಯಲ್ಲಿ ಸಿಸಿ ಟಿವಿಯ ಅಳವಡಿಕೆಯು ಸಮಸ್ಯೆಗೆ ಸರಿಯಾದ ಪರಿಹಾರವೆಂದು ಪ್ರಸ್ತುತಪಡಿಸಲಾಗುತ್ತಿದೆ. ಈ ಪರಿಹಾರವನ್ನು ಬೆಂಬಲಿಸುವ ಅನೇಕ ಬೆಂಬಲಿಗರು ಹೇಳುವುದೇನೆಂದರೆ ತರಗತಿಯಲ್ಲಿ ಸಿಸಿಟಿವಿ ಕ್ಯಾಮೆರಾ ಅಳವಡಿಸುವುದರಿಂದ ಶಿಕ್ಷಕರು ಸಮಯಕ್ಕೆ ಸರಿಯಾಗಿ ಬರುತ್ತಾರೆ ಮತ್ತು ಉತ್ತಮವಾಗಿ ಬೋಧಿಸುತಾರೆ. ಮಕ್ಕಳ ಸುರಕ್ಷತೆ, ಶಿಕ್ಷಣ ವ್ಯವಸ್ಥೆಯಲ್ಲಿ ಪಾರದರ್ಶಕತೆ ಮತ್ತು ಶಿಕ್ಷಕರ ಉತ್ತರದಾಯಿತ್ವವನ್ನು (=ಹೊಣೆಗಾರಿಕೆಯನ್ನು) ಖಚಿತಪಡಿಸಿಕೊಳ್ಳಲು ಸಿಸಿ ಟಿವಿ ಮುಖಾಂತರ ಮಾಡಿದ ಮುದ್ರಿಕೆಯನ್ನು ಪೋಷಕರು ಮತ್ತು ಅಧಿಕಾರಿಗಳು ತಮ್ಮ ತಮ್ಮ ಫೋನ್ಗಳಲ್ಲಿಯೂ ನೋಡಲು ಸಾಧ್ಯವಾಗುತ್ತದೆ. ಈ ವಿಚಾರವಾಗಿ ಸುದ್ದಿ ವಾಹಿನಿಗಳಲ್ಲಿ ಹಲವು ಚರ್ಚೆಗಳನ್ನು ಕೇಳುವ ಅವಕಾಶ ಸಿಕ್ಕಿತು. ಈ ಚರ್ಚೆಗಳನ್ನು ಆಲಿಸಿ (ಕೇಳಿ) ಮನಸ್ಸಿನಲ್ಲಿ ಉದ್ಭವಿಸುವ ಪ್ರಶ್ನೆಗಳಿಗೆ ಉತ್ತರಗಳು

ದೊರೆತದ್ದೇನೋ ಕಡಿಮೆ. ಸಿಕ್ಕಿದುವು. ಆದರೆ ಅನೇಕ ಹೊಸ ಪ್ರಶ್ನೆಗಳು ಹುಟ್ಟಿಕೊಂಡವು. ಈ ಲೇಖನದಲ್ಲಿ ಇಂತಹದೇ ಕೆಲವು ಪ್ರಶ್ನೆಗಳು ಮತ್ತು ಈ ಸಲಹೆಯಿಂದ (ತೃಪ್ತನಾಗಲು )ತೃಪ್ತಿಹೊಂದಲುಸಾಧ್ಯವಾಗದೆ ಇದ್ದದ್ದಕ್ಕೆ(ದಿರುವ) ಕೆಲವು ಕಾರಣಗಳನ್ನು ಹಂಚಿಕೊಳ್ಳಲು ಪ್ರಯತ್ನಿಸಲಾಗಿದೆ.

**ಸಿಸಿ ಟಿವಿಯನ್ನು ಇತರೆ ಸಂಪನ್ಮೂಲಗಳೊಂದಿಗೆ ಹೋಲಿಸುವುದಕ್ಕೆ ಮಹತ್ವ (=ಪ್ರಾಮುಖ್ಯತೆ) ನೀಡುವುದು ಎಷ್ಟು ಸಮಂಜಸ?**

ಶಿಕ್ಷಕರು ತರಗತಿಗೆ ನಿಯಮಿತವಾಗಿ ಹಾಜರಾಗುವುದು ಮತ್ತು ಸಿದ್ಧತೆ ಮಾಡಿಕೊಂಡು( ಸಿದ್ಧರಾಗಿ ) ಬರುವುದನ್ನು ಶಿಕ್ಷಣದ ಗುಣಮಟ್ಟದೊಂದಿಗೆ ಸೇರಿಸಲಾಗುತ್ತದೆ.. ಗುಣಮಟ್ಟದ ಶಿಕ್ಷಣ ನಿಸ್ಸಂದೇಹವಾಗಿ ಒಂದು ಗಂಭೀರ ಕಾಳಜಿಯ ವಿಷಯವಾಗಿದೆ. ಆದರೆ ಅನೇಕ ಸರ್ಕಾರಿ ಶಾಲೆಗಳಲ್ಲಿ ಖಾಯಂ ಶಿಕ್ಷಕರ ನೇಮಕಾತಿ ಮತ್ತು ಇತರ ಆವಶ್ಯಕ ಶೈಕ್ಷಣಿಕ (ಮೂಲಭೂತಸೌಕರ್ಯಗಳನ್ನ ಹಣದ ಕೊರತೆಯಿಂದ ತಡೆಹಿಡಿಯುವಂಥ (ಮುಂದೂಡುವಂಥ) ಪರಿಸ್ಥಿತಿಯಲ್ಲಿ ಗುಣಮಟ್ಟವನ್ನು ಖಚಿತಪಡಿಸಿಕೊಳ್ಳಲು ಸಿಸಿ ಟಿವಿಗೆ ಆದ್ಯತೆ ನೀಡುವುದು ಎಷ್ಟು ಸೂಕ್ತ? ಯಾವ ದೇಶದಲ್ಲಿ ಶಿಕ್ಷಣಕ್ಕಾಗಿ ಸರ್ಕಾರ ಮಾಡಿದ ವೆಚ್ಚದ ಬಗ್ಗೆ ಯಾವಾಗಲೂ ಅಸಮಾಧಾನವನ್ನೇ ವ್ಯಕ್ತಪಡಿಸಲಾಗುತ್ತಿದೆಯೋ ಆ ದೇಶದಲ್ಲಿ , ಶಿಕ್ಷಣ, ಶಿಕ್ಷಕರ ನೇಮಕಾತಿ, ಶಿಕ್ಷಕರ ಸಿದ್ಧತೆ ಮತ್ತು ಶಾಲೆಯ ಮೂಲಭೂತ ಸೌಕರ್ಯಗಳಾದ (ಸಂಪನ್ಮೂಲಗಳಾದ) ಕೊಠಡಿಗಳು, ಪುಸ್ತಕಗಳಿಂದ ಕೂಡಿದ ಗ್ರಂಥಾಲಯ, ಆಟದ ಮೈದಾನಗಳು, ಅಗತ್ಯ ಸಾಮಗ್ರಿಗಳು, ಸುಸಜ್ಜಿತ ಪ್ರಯೋಗಾಲಯಗಳು, ಶುದ್ಧ ನೀರು ಮತ್ತು ಶೌಚಾಲಯಗಳು ಮುಂತಾದ ಸೌಕರ್ಯಗಳ ಬಗ್ಗೆ ಯೋಚಿಸದೆ ಕೇವಲ CCTV ಮೇಲೆ ಗಮನಹರಿಸಿದರೆ ಇದು ನಿಜವಾಗಿಯೂ ಗುಣಮಟ್ಟದ (ಪರವಾಗಿ) ವ್ಯಾಪ್ತಿಯಲ್ಲಿದೆಯೇ? ಸಿಸಿ ಟಿವಿಯ ಸಂದರ್ಭದಲ್ಲಿ ನಡೆಯುತ್ತಿರುವ ಚರ್ಚೆಯಲ್ಲಿ ಈ ಪ್ರಶ್ನೆಗಳನ್ನು ಸಹ ವಿಮರ್ಶಿಸಬೇಕು(= ಚರ್ಚಿಸಬೇಕು).

CCTV ಕಣ್ಗಾವಲಿನಲ್ಲಿ ತರಗತಿಳ ಸ್ವರೂಪ

ತರಗತಿಯಲ್ಲಿ ಸಿಸಿಟಿವಿ ಅಳವಡಿಸುವ ತರ್ಕದ ಮೇಲೆ ಎದ್ದಿರುವ ಪ್ರಶ್ನೆಗಳು ಕೇವಲ ಖರ್ಚಿಗೆ ಸಂಬಂಧಿಸಿದವಲ್ಲ.. () ಸಾಕಷ್ಟು ಆರ್ಥಿಕ ಸಂಪನ್ಮೂಲಗಳು ಇದ್ದಾಗ ಪರಿಣಾಮಕಾರಿ ಬೋಧನೆ-ಕಲಿಕೆ ಪ್ರಕ್ರಿಯೆಯ ವ್ಯಾಪ್ತಿಯಲ್ಲಿ ಈ ಸಲಹೆಯು ಬರುತ್ತದೆಯೆ?? ನೀವು ಒಬ್ಬ

ಶಿಕ್ಷಕರಾಗಿದ್ದೀರಿ ಮತ್ತು ನೀವು ಕಲಿಸುತ್ತಿರುವ ತರಗತಿಯನ್ನು ಯಾರೋ ಒಬ್ಬರು ಹೊರಗಿನಿಂದ ಕ್ಯಾಮರಾ ಮೂಲಕ ವೀಕ್ಷಿಸುತ್ತಿದ್ದಾರೆ ಎಂದು ಕಲ್ಪಿಸಿಕೊಳ್ಳಿ. ಇಂತಹ ಸಂದರ್ಭದಲ್ಲಿ ಅಲ್ಲಿನ ಕಲಿಕೆ-ಬೋಧನೆಯ ವಾತಾವರಣ ಹೇಗಿರಬಹುದು? ಎಲ್ಲಾ ಪ್ರಯೋಗಗಳು ಯಾವಾಗಲೂ ಯಶಸ್ವಿಯಾಗುವುದಿಲ್ಲ ಎಂದು (ಭಾವಿಸಿ=) ತಿಳಿದಿರುವ ಶಿಕ್ಷಕನು ಬೋಧನಾ ವಿಧಾನವನ್ನು ಬಳಸಲು ಪ್ರೇರಿತನಾಗುತ್ತಾನೆಯೇ?(ಪ್ರೇರಿಸಲ್ಪಡುತ್ತಾನೆಯೆ?) ತರಗತಿಯಲ್ಲಿ ನಡೆಯುವ ಚರ್ಚೆ ಅಥವಾ ಸಾಮೂಹಿಕ ಕ್ರಿಯೆಯಲ್ಲಿ ಭಾಗವಹಿಸುತ್ತಿರುವ ವಿದ್ಯಾರ್ಥಿಗಳು ತುಂಬಾ ಉತ್ಸಾಹಿತರಾದಂತೆ ಕಾಣುತ್ತಿರುವ, ಆದರೆ ಹೊರಗಿನ ವೀಕ್ಷಕರಿಗೆ ಶಿಕ್ಷಕರಿಗೆ ವಿದ್ಯಾರ್ಥಿಗಳ ಮೇಲೆ ಯಾವುದೇ ನಿಯಂತ್ರಣವಿಲ್ಲ ಎಂದು ಅನಿಸುವಂಥ ಸಂದರ್ಭದಲ್ಲಿ ಚರ್ಚೆ ಅಥವಾ ಗುಂಪು ಕ್ರಿಯೆಯನ್ನು ಪ್ರೋತ್ಸಾಹಿಸಲು ಶಿಕ್ಷಕರಿಗೆ ಸಾಧ್ಯವಾಗುತ್ತದೆಯೇ? ಒಂದು ವೇಳೆ ಮಕ್ಕಳು ಕೇಳಿದ ತಕ್ಷಣವೇ ಪರಿಹಾರವನ್ನುಹೇಳದಿದ್ದರೆ (=ವಿವರಿಸದಿದ್ದರೆ,) ಹೊರಗಿನಿಂದ ನೋಡುವವರಿಗೆ ಶಿಕ್ಷಕರು ಅವರಿಗೆ ಏನನ್ನೂ ಕಲಿಸಿಲ್ಲ ಎಂದು ಅನಿಸಬಹುದು ಎಂಬುದನ್ನು ಅರಿತಿರುವ ಶಿಕ್ಷಕನು ಮಕ್ಕಳಿಗೆ ಕೆಲವು ಕ ಕ್ಲಿಷ್ಟಕರವಾದ ಪ್ರಶ್ನೆಗಳನ್ನು ಕೇಳಲು ಅಥವಾ ಕೆಲವು ಸವಾಲಿನಿಂದ ಕೂಡಿರುವ ಶೈಕ್ಷಣಿಕ ಸಮಸ್ಯೆಗಳನ್ನುಅವರ ಮುಂದೆ ಪ್ರಸ್ತುತಪಡಿಸಲು ಧೈರ್ಯ ತಾಳುತ್ತಾನೆಯೆ?? ಇಂತಹ ಪರಿಸರದಲ್ಲಿ ಯಾವುದೇ ಶಿಕ್ಷಕ ಅನೌಪಚಾರಿಕ ವಾಗಿ ಪಠ್ಯಕ್ರಮಕ್ಕೆ ನೇರವಾಗಿ ಸಂಬಂಧಪಡದ ಹಾಸ್ಯ,(=ನಗೆಹನಿ), ಹಾಡು, ಕವಿತೆ ಅಥವಾ ಕಥೆಯನ್ನು ಮಕ್ಕಳಿಗೆ ಹೇಳಲು ಸಾಧ್ಯವಾಗುತ್ತದೆಯೇ? ಕಾರಣ ಇದನ್ನು ಗಮನಿಸಿದ ಯಾರಾದರೂ, ಶಿಕ್ಷಕನು ಸಮಯ ವ್ಯರ್ಥ ಮಾಡುತ್ತಿದಾನೆಂ ದು ತಿಳಿಯಬಹುದೆಂಬ ಭಯವಿರುತ್ತದೆ.ಇಂತಹ ತೀವ್ರವಾದ ಕಣ್ಗಾವಲಿನ ವಾತಾವರಣದಲ್ಲಿ, ಒಬ್ಬ ಶಿಕ್ಷಕ ತನ್ನ ಮಕ್ಕಳನ್ನು, ಪಿತೃಪ್ರಧಾನ ಮತ್ತು ಜಾತಿವಾದಿ ರಚನೆಗಳಿಗೆ ಸವಾಲು ಹಾಕಲು ಹೇಗೆ ಪ್ರೋತ್ಸಾಹಿಸಬಹುದು? ಹಲವಾರು ಪೋಷಕರು ಇಂತಹ ಯಥಾಸ್ಥಿತಿಯ ಹಾಗೂ ಅಸಮಾನತೆಯ ಬೆಂಬಲಿಗರಾಗಬಹುದು. ಇಂತಹ ಪರಿಸ್ಥಿತಿಯಲ್ಲಿ ವಿದ್ಯಾರ್ಥಿಗಳು ತಾರ್ಕಿಕವಾಗಿ ಮತ್ತು ವಿಮರ್ಶಾತ್ಮಕವಾಗಿ ಯೋಚಿಸುವಂತೆ ಮಾಡುವ ಮುಕ್ತ ಮನಸ್ಸಿನ ಪ್ರಯತ್ನವು ತೀವ್ರವಾದ ಕಣ್ಗಾವಲಿಗೆ ಬಲಿಯಾಗಬಹುದು.

ಮಕ್ಕಳ ಸ್ಥಿತಿ ಬಹುಶ: ಇನ್ನಷ್ಟು ಶೋಚನೀಯವಾಗಬಹುದು. ಅಂತಹ ಕಣ್ಗಾವಲಿನ ತರಗತಿಗಳಲ್ಲಿ, ಮಕ್ಕಳು ಮುಗ್ಧ ಚೇಷ್ಟೆಗಳನ್ನು ಮಾಡಲು ಮತ್ತು ತಮ್ಮ ಹೃದಯದ ರಹಸ್ಯಗಳನ್ನು ಪರಸ್ಪರ

ಹಂಚಿಕೊಳ್ಳಲು ಸಾಧ್ಯವಾಗುತ್ತದೆಯೇ? ಯಾವಾಗ ತಮ್ಮ ಪ್ರತಿಯೊಂದು ತಪ್ಪನ್ನು ಅದೆಷ್ಟೋ ಜನ ತೀವ್ರವಾಗಿ ಗಮನಿಸುತ್ತಿದ್ದಾರೆಂದು ತಿಳಿದಾಗ ಬಹುಶ: ಮಕ್ಕಳು ತಪ್ಪು ಮಾಡುವ ಮತ್ತು ಅದನ್ನು ತಿದ್ದಿಕೊಳ್ಳುವ ಅವಕಾಶಗಳು ಸಹ ಕ್ಷೀಣಿಸಬಹುದು. ಶಾಲೆಯಲ್ಲಿ ಮತ್ತು ಮನೆಯಲ್ಲಿ ತೀವ್ರ ಪೈಪೋಟಿಯ ವಾತಾವರಣವನ್ನು ಸೃಷ್ಟಿಸಲು ಪ್ರಯತ್ನಿಸುತ್ತಿರುವ ಯುಗದಲ್ಲಿ, ಪೋಷಕರು ತಮ್ಮ ಮಗುವನ್ನು ಶಿಕ್ಷಕರಿಗಿಂತ ಹೆಚ್ಚಾಗಿ ಗಮನಿಸುವ ಮತ್ತು ಮನೆಗೆ ತಲುಪಿದ ತಕ್ಷಣ ಅವನನ್ನು ವಿಚಾರಿಸುವ ಸಂದರ್ಭದಲ್ಲಿ ಮಗುವಿನ ಪರಿಸ್ಥಿತಿಯನ್ನು ಊಹಿಸಿ. ಕೆಲವರು ಇಂತಹ ಪ್ರಶ್ನೆಗಳ ಸುರಿಮಳೆಗೈಯುತ್ತಾರೆ-"ಶಿಕ್ಷಕರು ಕೇಳಿದಾಗ ನೀನೇಕೆ ಕೈ ಎತ್ತಲಿಲ್ಲ?" "ನಾನು ಮನೆಯಲ್ಲಿ ಹೇಳಿಕೊಟ್ಟಂತೆ ನೀನು ಏಕೆ ಉತ್ತರಿಸಲಿಲ್ಲ?" "ಶಿಕ್ಷಕರು ಏನಾದರೂ ಹೇಳುತ್ತಿರುವಾಗ ನೀನು ಯಾಕೆ ಹೊರಗೆ ನೋಡುತ್ತಿದ್ದೀ"? "ನೀನು ನಮ್ಮ ಮನೆಯ ಆಂತರಿಕ ವಿಷಯವನ್ನು ಶಿಕ್ಷಕರಿಗೆ ಏಕೆ ಹೇಳಿದೆ?" ಅಂತಹ ವಾತಾವರಣದಲ್ಲಿ ಕೆಲವು ಕೌಟುಂಬಿಕ ಅಥವಾ ಸಾಮಾಜಿಕ ಸವಾಲುಗಳನ್ನು ಎದುರಿಸುತ್ತಿರುವ ಮಗು ಎಂದಾದರೂ ತನ್ನ ಭಾವನೆಗಳನ್ನು ತಮ್ಮ ಸಹಪಾಠಿಗಳು ಅಥವಾ ಶಿಕ್ಷಕರೊಂದಿಗೆ ಹಂಚಿಕೊಳ್ಳಲು ಸಾಧ್ಯವಾಗುತ್ತದೆಯೇ?

ಇಂತಹ ವಾತಾವರಣದಲ್ಲಿ, ಶಿಕ್ಷಕರು ಕೇವಲ 'ಕಲಿಸಲು' ಮತ್ತು ವಿದ್ಯಾರ್ಥಿ ಕೇವಲ 'ಕಲಿಯಲು' ಎಂಬುದೇ ಸುರಕ್ಷಿತ ಆಯ್ಕೆಯಾಗಿರುತ್ತದೆ – ಮಕ್ಕಳು ಶಾಂತವಾಗಿ, ವಿಧೇಯತೆಯಿಂದ, ಯಾವಾಗಲೂ ಶಿಸ್ತುಬದ್ಧರಾಗಿ (=ವಾಗಿ) ಕೇಳಿದಾಗ ಮಾತ್ರ ಮಾತನಾಡುತ್ತಾರೆ. ಇಂತಹ ಶೈಕ್ಷಣಿಕ ವಾತಾವರಣದಲ್ಲಿ ಎಲ್ಲಿಯಾದರೂ, ಯಾರಾದರೂ ಯಥಾಸ್ಥಿತಿಗೆ ಸವಾಲು ಹಾಕಲು ಸಾಧ್ಯವೇ! ಇಂತಹ ಸ್ಥಳದಲ್ಲಿ ಶಿಕ್ಷಣವನ್ನು ಕೇವಲ ದಾಟಿಸುವುದು (ದ ವರ್ಗಾವಣೆ=ಹಸ್ತಾಂತರ ) ಮಾತ್ರ ಸಾಧ್ಯ. ಇಂತಹ ಶಿಕ್ಷಣವು ಪರಿವರ್ತನೆಯನ್ನು ತರುವಂಥದಾಗ ಲಾರದು. ಅನೇಕ ವರ್ಷಗಳಿಂದ, 'ಕ್ರಿಟಿಕಲ್ ಪೆಡಾಗಾಜಿ' ಗೆ ಸಂಬಂಧಿಸಿದ ತತ್ವಜ್ಞಾನಿಗಳು ಮತ್ತು ಶಿಕ್ಷಣತಜ್ಞರು ಮಕ್ಕಳನ್ನು ಕೇವಲ ಖಾಲಿ ಪಾತ್ರೆಗಳೆಂದು ಭಾವಿಸಿ ನೀಡುವ ಏಕಮುಖ ಜ್ಞಾನವು ಶಿಕ್ಷಣವಲ್ಲ ಎಂದು ವಿವರಿಸಲು ಪ್ರಯತ್ನಿಸಿದ್ದಾರೆ. ತರಗತಿಯಲ್ಲಿ ತಪ್ಪುಗಳನ್ನು ಮಾಡುವುದು, ತಪ್ಪುಗಳಿಂದ ಕಲಿಯುವುದು ಮತ್ತು (ಪರಸ್ಪರ) ಬೇರೆಯವರಿಂದ ಕಲಿಯುವಂತಹ ಅವಕಾಶಗಳು ಲಭ್ಯವಿರಬೇಕು. ಮತ್ತು ಇಂತಹ ತರಗತಿಗಳನ್ನು ಸಂಶಯದ ದೃಷ್ಟಿಯಿರುವ ಸಿಸಿ ಟಿವಿಯ

ಕಣ್ಗಾವಲಿನಲ್ಲಿ ರೂಪಿಸಲಾಗುವುದಿಲ್ಲ. ತರಗತಿಗಳನ್ನು ಸುರಕ್ಷಿತ, ಪಾರದರ್ಶಕ ಮತ್ತು ಜವಾಬ್ದಾರಿಯುತವಾಗಿ ಮಾಡುವ ಪರಿಹಾರವು ಸಿಸಿ ಟಿವಿಯಲ್ಲಿ ದೊರೆಯುತ್ತದೆ ಎಂಬಂಥ ಅಭಿಪ್ರಾಯಗಳನ್ನು ಕೂಡ ಪರೀಕ್ಷಿಸಲು ಪ್ರಯತ್ನಿಸುವುದು ಇಲ್ಲಿ ಅವಶ್ಯಕವಾಗಿದೆ. (ಮುಖ್ಯವಾಗಿದೆ.)

**ನಂಬಲನರ್ಹ ಶಿಕ್ಷಕರು ಮತ್ತು ಯಾವಾಗಲೂ ನಂಬಲರ್ಹ ಪೋಷಕರು.**

ಸಿಸಿ ಟಿವಿಯನ್ನು ಅಳವಡಿಸುವುದರಿಂದ ಅದರ ಮೂಲಕ ತಂದೆ ತಾಯಿಗಳು ತರಗತಿಯಲ್ಲಿ ನಡೆಯುವ ಪ್ರಕ್ರಿಯೆಗಳನ್ನು ನೋಡುತ್ತಾರಾಗಿ ಮಕ್ಕಳ ಸುರಕ್ಷತೆ ಮತ್ತು ಶಿಕ್ಷಣದ ಗುಣಮಟ್ಟವು ಇತ್ಯರ್ಥವಾಗಿ ಬಿಡುತ್ತದೆಂಬ ನಂಬಿಕೆಯು ಶಿಕ್ಷಕನು ವಿಶ್ವಾಸಾರ್ಹನ ಲ್ಲ ಮತ್ತು ಪೋಷಕರು ಯಾವಾಗಲೂ ವಿಶ್ವಾಸಾರ್ಹರು ಎಂಬ ಅಭಿಪ್ರಾಯವನ್ನು ಆಧರಿಸಿದೆ. ಶಿಕ್ಷಕರಿಗೆ ಮಕ್ಕಳ ಒಳ್ಳೆಯದು ಮತ್ತು ಕೆಟ್ಟದ್ದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಮತ್ತು ಪೋಷಕರು ಯಾವಾಗಲೂ ಮಕ್ಕಳ ಒಳ್ಳೆಯದು ಮತ್ತು ಕೆಟ್ಟದ್ದನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಾರೆಂಬ ಅಭಿಪ್ರಾಯವು (= ನಂಬಿಕೆಯು) ವಾಸ್ತವಕ್ಕೆ ದೂರವಾದ್ದು. . ( ಆಘಾತಕ್ಕೊಳಗಾದ ಮಗುವು ಸಂವೇದನಾಶೀಲನಾದ ಶಿಕ್ಷನೊಂದಿಗೆ, ಮನೆಯಲ್ಲಿ ಅಥವಾ ನೆರೆಹೊರೆಯಲ್ಲಿ ನಡೆಯುತ್ತಿರುವ ಹಿಂಸೆ ಅಥವಾ ತಾರತಮ್ಯದ ಅನುಭವಗಳನ್ನು ಹಂಚಿಕೊಂಡಿರುವಂಥ ಅನೇಕ ಘಟನೆಗಳು ಶಾಲೆಯ ಆವರಣ ಅಥವಾ ತರಗತಿಯೊಳಗೆ ನಡೆದಿವೆ. ಶಾಲೆಯಲ್ಲಿ ಓದುತ್ತಿರುವ ಹೆಣ್ಣುಮಕ್ಕಳು ಶಿಕ್ಷಕನನ್ನು ನಂಬಿ, ಶಾಲೆಯ ನೆರವಿನಿಂದ ಕುಟುಂಬಸ್ಥರು ನಡೆಸುತ್ತಿರುವ ಬಾಲ್ಯವಿವಾಹಗಳನ್ನು ನಿಲ್ಲಿಸಿರುವ ಇಂತಹ ಇನ್ನೂ ಹಲವು ಘಟನೆಗಳು ಲಭ್ಯವಾಗಿವೆ. ಮಗುವಿನ ವರ್ತನೆಯಲ್ಲಿನ ಹಠಾತ್ ಬದಲಾವಣೆಯಿಂದ ಎಚ್ಚೆತ್ತ (=ಅರಿತು) ಸೂಕ್ಷ್ಮ ಮತ್ತು ಜಾಗರೂಕ ಶಿಕ್ಷಕರು ಮನೆಯಲ್ಲಿ ಅಥವಾ ಟ್ಯೂಷನ್ ಅಥವಾ ಇನ್ನೆಲಯಾದರೂ ದೈಹಿಕ ಅಥವಾ ಲೈಂಗಿಕ ದೌರ್ಜನ್ಯಕ್ಕೆ ಬಲಿಯಾಗಿದ್ದಾರೆಯೋ ಹೇಗೆ ಎಂಬಂಥ ಎಷ್ಟೋ ಪ್ರಕರಣಗಳನ್ನು ತಿಳಿಯಲು ಪ್ರಯತ್ನಿಸಿದ್ದಾರೆ. ಅನೇಕ ಬಾರಿ, ಮಕ್ಕಳು ತಮ್ಮ ಹೆತ್ತವರೊಂದಿಗೆ ಹಂಚಿಕೊಳ್ಳಲಾಗದ ವಿಷಯಗಳನ್ನು ಹಾಗೂ ತಮ್ಮ ಕಷ್ಟದ ಅನುಭವಗಳು ಅಥವಾ ಆಕಾಂಕ್ಷೆಗಳನ್ನು ಹಂಚಿಕೊಳ್ಳಲು ತರಗತಿಯ ನಾಲ್ಕು ಗೋಡೆಗಳನ್ನು ಸುರಕ್ಷಿತ ಸ್ಥಳವೆಂದು ಭಾವಿಸುತ್ತಾರೆ. ಮನೆಯಲ್ಲಿ ವೈದ್ಯ ಅಥವಾ ಇಂಜಿನಿಯರ್ ಆಗ ಬೇಕೆಂಬ ಒತ್ತಡವನ್ನು ಎದುರಿಸುತ್ತಿರುವ ಹುಡುಗಿ ತನ್ನ ಕವಿತೆಗಳನ್ನು ತನ್ನ ಹಿಂದಿ ಶಿಕ್ಷಕರಿಗೆ

ಹೇಳುತ್ತಾಳೆ. ಮತ್ತೊಬ್ಬ ಹುಡುಗಿ ತನ್ನ ಹೆತ್ತವರ ಇಚ್ಛೆಗೆ ಹೊರತಾಗಿ (ನಿ) ಕಲಾವಿದೆಯಾಗುವ ಕನಸನ್ನು ತನ್ನ ಕಲಾ ಶಿಕ್ಷಕರೊಂದಿಗೆ ಹಂಚಿಕೊಂಡಿದ್ದಾಳೆ. ವಿದ್ಯಾರ್ಥಿಯೊಬ್ಬ ಪರೀಕ್ಷೆಯಲ್ಲಿ ಅನುತ್ತೀರ್ಣನಾಗಿ ತನ್ನ ಫಲಿತಾಂಶವನ್ನು ಪೋಷಕರಿಗೆ ತಿಳಿಸುವ ಧೈರ್ಯವಿಲ್ಲದೆ ಆತ್ಮಹತ್ಯೆ ಮಾಡಿಕೊಂಡ ಘಟನೆಗಳನ್ನು ನಾವು ಕೇಳಿಲ್ಲವೇ?

ತನ್ನ ನಿರಾಸೆಗಿಂತ ಹೆಚ್ಚಾಗಿ (=ಜಾಸ್ತಿ) ತನ್ನ ಪೋಷಕರ ಅಸಹನೀಯವಾದ ಹಾಗೂ ಭಯಭೀತಗೊಳಿಸುವ ನಿರಾಸೆಯೇ ಹೆಚ್ಚಾಗಿರುತ್ತದೆ. ಈ ಘಟನೆಗಳ ಬಗ್ಗೆ ಮಾತನಾಡತ್ತಿರುವುದರ ಅರ್ಥ ತರಗತಿಗಳು ಸದಾ ಸುರಕ್ಷಿತ, ಭೇದಭಾವರಹಿತ ಮತ್ತು ಸಂವೇದನಾಶೀಲ ಸ್ಥಳವಾಗಿರುತ್ತವೆ ಮತ್ತು ಅಲ್ಲಿ ಸದಾ ಅಧ್ಯಾಪಕ ಮಕ್ಕಳ ಹಕ್ಕಿನ ರಕ್ಷಣೆಗಾಗಿ ಗಾಗಿ ಕಟಿಬದ್ಧನಾಗಿರುತ್ತಾನೆ ಎಂದಲ್ಲ . ಆದರೆ ಅಂತಿಮವಾಗಿ [( ನ)] ಸಿಸಿ ಟಿವಿಯ ಮೂಲಕ ತಂದೆ ತಾಯಂದಿರು ತರಗತಿಗಳ ಮೇಲೆ ಗಮನವಿರಿಸುವುದರಿಂದ ಶಿಕ್ಷಣದಲ್ಲಿ ಬದಲಾವಣೆ ಬರಬಹುದೆಂಬುದು ಯಾವುದೇ ತಾರ್ಕಿಕ ನೆಲೆಗಟ್ಟಿನಿಂದ ಮೂಡಿದ್ದಲ್ಲ (=ಉತ್ಪನ್ನವಲ್ಲ) ಎಂಬ ತೀರ್ಮಾನಕ್ಕೆ ಬರಬಹುದು.

**ಶಿಕ್ಷಕರ ಕಣ್ಗಾವಲಿನ ಹೆಸರಿನಲ್ಲಿ ಎಲ್ಲಾ ಶಿಕ್ಷಕರ ಸಿದ್ಧತೆ**

ಸಿಸಿ ಟಿವಿಯ ಮೇಲೆ ಗುಣಮಟ್ಟದ ಶಿಕ್ಷಣ ಮತ್ತು ಮಕ್ಕಳ ಸುರಕ್ಷತೆಯ ಜವಾಬ್ದಾರಿಯನ್ನು ಹೊರಿಸುವುದು, ಎಲ್ಲೋ ಒಂದು ಕಡೆ ನಮ್ಮ ಮತ್ತು ಶಿಕ್ಷಣ ಅಧಿಕಾರಿಗಳ ಗಮನವನ್ನು ಕೆಲವು ಮುಖ್ಯವಾದ (ಸಮಸ್ಯೆ=) ವಿವಾದಗಳ ಹಿಂದೆಯೂ ಸುತ್ತಾಡಿಸುತತ್ತದೆ. ಅವು ಶಿಕ್ಷಕರ ಸಿದ್ಧತೆ ಹಾಗೂ ಅವರಿಗೆ ಅನುಕೂಲವಾಗುವ ಸ್ಥಿತಿಗಳನ್ನು ನಿರ್ಮಾಣ ಮಾಡುವ ಆಶಯ ಮತ್ತು ಪ್ರಯತ್ನಗಳು. ಒಂದು ವೇಳೆ ನಮಗೆ ಅಧ್ಯಾಪಕರು ಪೂರ್ವಸಿದ್ಧತಯಿಲ್ಲದೆ ತರಗತಿಗಳಿಗೆ ಪ್ರವೇಶಿಸುತ್ತಾರೆ ಇಲ್ಲವೆ ಚೆನ್ನಾಗಿ ಪಾಠ ಮಾಡುವುದಿಲ್ಲ ಮತ್ತು ಅವರ ಉಪಸ್ಥಿತಿಯ ಹೊರತಾಗಿಯೂ ಮಕ್ಕಳು ಸುರಕ್ಷಿತವಾಗಿಲ್ಲ ಎಂದು ಅನಿಸುತ್ತದೆಂದಾದರೆ ಅವರ ಮೇಲೆ ಗಮನಹರಿಸುವುದಕ್ಕಿಂತ ಹೆಚ್ಚು (=ಅಧಿಕ) ಅವಶ್ಯಕತೆ ಇರುವುದು, ಅವರ ಸಿದ್ಧತೆ ಮತ್ತು ಅವರ ಸಮರ್ಥನೆ ತಾನೆ?. ಆದರೆ ಇಂತಹ ಜವಾಬ್ದಾರಿಯನ್ನು ನಾವು ಎಷ್ಟೋ ಬಿ.ಎಡ್ ಪದವಿಗಳನ್ನು ಮಾರಾಟ ಮಾಡುತ್ತಿರುವ ಚಿಕ್ಕ ಚಿಕ್ಕ ಅಂಗಡಿಗಳ ಕೈಗೆ (=ಯಲ್ಲಿ) ಒಪ್ಪಿಸಿ ಬಿಟ್ಟಿದ್ದೇವೆ. ಈ

ಅಂಗಡಿಗಳ ಆಸಕ್ತಿ ಶೈಕ್ಷಣಿಕ ದೃಷ್ಟಿಕೋಣದಿಂದ  ಸಮರ್ಥರಾದ ಮತ್ತು ಸಾಮಾಜಿಕವಾಗಿ (ಭಾವನಾತ್ಮಕ) ಸಂವೇದನಾಶೀಲರಾದ ಅಧ್ಯಾಪಕರನ್ನು ಸಿದ್ಧಗೊಳಿಸುವುದಲ್ಲವೇ ಅಲ್ಲ. ತಇಂಥ ಪರಿಸ್ಥಿತಿಯಲ್ಲಿ ಸಿಸಿ ಟಿವಿಯ ಅಳವಡಿಕೆ ಅಧ್ಯಾಪಕರನ್ನು ಇನ್ನಷ್ಟು ಉತ್ತಮ (ಸಾಮರ್ಥ್ಯವಂತರನ್ನಾಗಿ) ಮತ್ತು ಹೊಣೆಗಾರರನ್ನಾಗಿ  ಮಾಡುವುದಕ್ಕಿಂದ ಹೆಚ್ಚಾಗಿ ಅವರನ್ನುಹೆಚ್ಚು ಜಾಗರೂಕರಾಗಿ ಇರಲು ಪ್ರೇರೇಪಿಸುತ್ತದೆ.

**ಶಿಕ್ಷಣ ಸಂಸ್ಥೆಯಲ್ಲಿ ಸುರಕ್ಷತೆಯ(=ಭದ್ರತೆಯ) ಪರಿಕಲ್ಪನೆಗಳ ಬಗ್ಗೆ ಮರು-ಚಿಂತನೆಯ ಅಗತ್ಯ**

ಒಂದು ಶೈಕ್ಷಣಿಕ ಸಂಸ್ಥೆಯಲ್ಲಿ ಸುರಕ್ಷತೆಯನ್ನು  ಕೇವಲ ಕಣ್ಗಾವಲಿನ ಮಾಧ್ಯಮದ ಮೂಲಕ ಎಂದು ಗೊತ್ತುಪಡಿಸುವ(=ನಿಶ್ಚಯಿಸುವ) ವಿಚಾರವೇ ಎಲ್ಲೋ ಒಂದು ಕಡೆ  (ಮುಗ್ಧತೆ=) ಸರಳತೆಯಿಂದಲೂ  ಪೀಡಿತವಾಗಿದೆ ಎಂದರ್ಥ.(=ಗೆ ತುತ್ತಾದಂತೆ.) ಹರಿಯಾಣದ ಒಂದು ಶಾಲೆಯಲ್ಲಿ ನಡೆದ ಆ ದುರ್ಘಟನೆ (=ಘಟನೆ)  ನಮ್ಮೆಲ್ಲರ ಗಮನವನ್ನುಸಿಸಿಟಿವಿ ಮೇಲೆ ತಂದು ನಿಲ್ಲಿಸಿಬಿಟ್ಟಿತು.  ಆ ದುರ್ಘಟನೆ ನಿಜಕ್ಕೂ ಏನು?  ಒಬ್ಬ ಬಾಲಕ (=ಒಂದು ಮಗು) ಶವವಾಗಿ ಶೌಚಾಲಯದಲ್ಲಿ  ಕಂಡುಬಂದದ್ದು. ನನಗೆ ಅರ್ಥವಾಗದ ವಿಷಯವೆಂದರೆ ತರಗತಿಯಲ್ಲಿ ಸಿಸಿಟಿವಿಯ (ಅಳವಿಡಿಕೆ=) ಇರುವಿಕೆ ಇಂತಹ ಘಟನೆಗಳನ್ನು ಹೇಗೆ ತಪ್ಪಿಸುತ್ತದೆ? ಶಾಲೆಯ ಸಾಧ್ಯವಿರುವ ಎಲ್ಲಾ  ಸ್ಥಳಗಳಲ್ಲಿ ಸಿಸಿಟಿವಿಯನ್ನು ಅಳವಡಿಸಲು ಸಾಧ್ಯವೇ? ಆದರೆ ಪ್ರಶ್ನೆ ಇರುವುದು ಸಿಸಿಟಿವಿಯ ಉಪಸ್ಥಿತಿ ಅಥವಾ ಅನುಪಸ್ಥಿತಿಯದ್ದಲ್ಲ. ಒಂದುವೇಳೆ ಪೋಲಿಸರು ಕೊಟ್ಟಂತಹ ವರದಿ ಸತ್ಯಕ್ಕೆ  ಹತ್ತಿರವಾಗಿತ್ತೆಂದಾದರೆ  ಪ್ರದ್ಯುಮ್ನನ ಹತ್ಯೆ ಯಾರೋ ಗಾಡಿ ಚಾಲಕ ಮಾಡಿದ್ದಲ್ಲ; ಲ್ಲ.ಬದಲಿಗೆ ಅವರ ಶಾಲೆಯಲ್ಲೇ ಓದುತ್ತಿರುವ ಮತ್ತೋರ್ವ ವಿದ್ಯಾರ್ಥಿ ಮಾಡಿದ್ದು. ಆ ವಿದ್ಯಾರ್ಥಿಗೆ ಆ ಶಾಲೆ ಮತ್ತು ಸಮಾಜ ಒಂದು ಜೀವದ ಮಹತ್ವ(=ಬೆಲೆಯ) ಎಷ್ಟೆಂಬುದನ್ನು ಹೇಳಿಕೊಡಲಿಲ್ಲ.(=ತಿಳುವಳಿಕೆಯನ್ನೂ ಸಹ ನೀಡಲಿಲ್ಲ). ?ಹೇಳಿಕೊಟ್ಟದ್ದು ಕೇವಲ ಶಾಲೆ ಮತ್ತು ಮನೆಯನ್ನು ಕುರಿತಾದ ಭಯ. (ಭಯದ ವಾತಾವರಣ). ಅದು ಎಷ್ಟೆಂದರೆ ಯಾರದೋ ಪ್ರಾಣವನ್ನು ತೆಗೆದುಬಿಡುವಷ್ಟರ ಮಟ್ಟಿಗೆ (ವಿವಶರನ್ನಾಗಿ=) ದುರ್ಬಲರನ್ನಾಗಿ ಮಾಡಿಬಿಡುವಷ್ಟು., ಒಂದು ಮಗು ಶಾಲೆಯಲ್ಲಿ ನಡೆಯುವ ಅಧ್ಯಾಪಕ ಮತ್ತು ಪೋಷಕರ ಸಭೆಯಿಂದ  ಎಷ್ಟೊಂದು ಭಯಪಡುತ್ತಾನೆಂದರೆ  ಅದನ್ನು ತಪ್ಪಿಸಲು ಯಾರದೋ ಪ್ರಾಣವನ್ನು ಸಹ ತೆಗೆಯುವಷ್ಟು..

ಹಾಗಾದರೆ ಅದರ ಭಯದ ಕಾರಣ ಒಂದೋ "ದೃಷ್ಟ ಮತ್ತು ಭಯಾನಕ" ಅಧ್ಯಾಪಕನಾಗಿರಬಹುದು ಅಥವಾ ಮನೆಯ ವಾತಾವರಣವಾಗಿರಬಹುದು. ಶಿಕ್ಷಕನು ನೀಡಿದ ದೂರು ಮನೆಯಲ್ಲಿ ಆ ಮಗುವಿಗೆ ಮಾನಸಿಕ ಅಥವಾ ಶಾರೀರಿಕ ಹಿಂಸೆಗೆ ಕಾರಣವಾಗಿರ ಬಹುದೇ? ಈ ಪ್ರಶ್ನೆಯ ವ್ಯಾಪ್ತಿ (=ಸರಹದ್ದು) ಕೇವಲ ಇಷ್ಟೇ ಅಲ್ಲ. (=ಇಲ್ಲಿಗೇ ಪೂರ್ಣವಾಗುವುದಿಲ್ಲ. )

ಎಲ್ಲೋ ಒಂದು ಕಡೆ ನಾವು ಅಧ್ಯಾಪಕರು, ಪೋಷಕರು ಮತ್ತು ಮಕ್ಕಳಲ್ಲಿ ಸಹಾನುಭೂತಿ, (ಭಾವನಾತ್ಮಕತೆ) ಸಂವೇದನಾಶೀಲತೆ ಮತ್ತು ಮಾನವ ಜೀವನ ಹಾಗೂ ಹಕ್ಕುಗಳ ಬಗ್ಗೆ ಗೌರವಪೂರ್ಣ ಮೌಲ್ಯಗಳನ್ನು ಸ್ಥಾಪಿಸುವ ಅವಶ್ಯಕತೆ ಮತ್ತು ಜವಾಬ್ದಾರಿಯಿಂದ ಹಿಂದೆಸರಿಯುತ್ತಿಲ್ಲ ತಾನೆ?? ಕನಿಷ್ಟ ಪಕ್ಷ ಈ ಘಟನೆಯ ನಂತರ ನಡೆಯುವ (= ಆಗುವ) ವಿಮರ್ಶೆಗಳಲ್ಲಂತೂ ಇದನ್ನು ಕುರಿತಾದ ಚಿಂತೆ ಎಲ್ಲಿಯೂ ಕಂಡುಬರುತ್ತಿಲ್ಲ.. ಸಿಸಿಟಿವಿಗಿಂತ ಹೆಚ್ಚಿನ ಅವಶ್ಯಕತೆ ಇರುವುದು ಶಿಕ್ಷಣಪದ್ಧತಿ (ಯೋಜನೆ) ಮತ್ತು ಪಠ್ಯಕ್ರಮವನ್ನು ಅಭಿವೃದ್ಧಿಪಡಿಸುವುದು. ಅದು ಸಹ ಮಾನವರ () ಶಾರೀರಿಕ, ಭಾವನಾತ್ಮಕ ಮತ್ತು ಅರಿವಿನ ಒಳಿತನ್ನು(ಹಿತಾಸಕ್ತಿಗಳನ್ನು) ಅರ್ಥಮಾಡಿಕೊಂಡು ಅದಕ್ಕೆ ಸಂಬಂಧಿಸಿದ ಗಡ ಗಳನ್ನು ಗುರುತಿಸಿ ಅವುಗಳನ್ನು ಗೌರವಿಸುವಂಥ ಮನುಷ್ಯರಾಗಲು ವಿದ್ಯಾರ್ಥಿಗಳನ್ನು ಪ್ರೇರೇಪಿಸುವಂಥದಾಗಿರಬೇಕು .

ಅಂತಿಮವಾಗಿ, ನಾವು ಶಿಕ್ಷಣವನ್ನು ಏಕಪಕ್ಷೀಯ ಜ್ಞಾನ ವಿತರಣಾ ಪ್ರಕ್ರಿಯೆ ಎಂದು ಪರಿಗಣಿಸದಿದ್ದರೆ ಮತ್ತು ಶಿಕ್ಷಣದಲ್ಲಿ ಸಾಮಾಜಿಕ ಬದಲಾವಣೆಯ ಸಾಧ್ಯತೆಯನ್ನು ಹುಡುಕಿದರೆ, ಶೈಕ್ಷಣಿಕ ಪ್ರಕ್ರಿಯೆಗಳ ಬಗ್ಗೆ ಈ ಭರವಸೆಯನ್ನು ಇಟ್ಟುಕೊಳ್ಳಬಹುದು. ಆ ಭರವಸೆಯೆಂದರೆ, ಹೆಚ್ಚು ಶ್ರೇಣೀಕೃತ ಮತ್ತು ಅಸಮಾನ ಸಮಾಜದಿಂದ ಕರ್ಮಠತೆ(ಮತಾಂಧತೆ) , ಪೂರ್ವಗ್ರಹಗಳು, ಮತ್ತು ಅತಾರ್ಕಿಕತೆಯ ಬೇರುಗಳನ್ನು ಕಿತ್ತೆಸೆಯುವ ತಳಹದಿಯನ್ನು ಸಿದ್ಧಪಡಿಸುತ್ತದೆ ಎಂಬುದು. ಆಗ ಯಾವುದೇ ಭಯವಿಲ್ಲದೆ ಪ್ರಾಮಾಣಿಕವಾದ ಸಂವಾದ ಸಾಧ್ಯವಾಗುವಂಥ ಸ್ಥಳದಲ್ಲಿ ತರಗತಿಗಳನ್ನು ಸ್ಥಾಪಿಸಬೇಕಾಗುತ್ತದೆ. . ಪೂರ್ವಾಗ್ರಹಗಳು ಮತ್ತು (ರೂಢಿವಾದಿ=) ಸಾಂಪ್ರದಾಯಿಕ ಪರಿಕಲ್ಪನೆಗಳನ್ನು ಬೇರು ಸಹಿತ ಕಿತ್ತುಹಾಕಲು ಸಂವೇದನಾಶೀಲವಾಗಿರುವ ಮತ್ತು 'ನಾನ್ ಜಜ್ ಮೆಂಟಲ್' ಆಗಿರುವಂಥ ಸ್ಥಳಗಳ ಆವಶ್ಯಕತೆ ಬರುತ್ತದೆ. . ಅಂತಹ

ಸ್ಥಳಗಳಲ್ಲಿ , ಸಂವಾದಗಳು ಪ್ರಾಮಾಣಿಕವಾಗಿರದೆ ಕೇವಲ ಕ್ಯಾಮರಾಕ್ಕಾಗಿ ಮಾಡಿದ ಪ್ರದರ್ಶನವಾಗಿರುವಂಥ ಮೈಕ್ರೋಫೋನ್ ಮತ್ತು ಸಿಸಿ ಟಿವಿಯ ಲೆನ್ಸ್ ಗಳು ಇರಕೂಡದು..

ಶಿಕ್ಷಣ ಸಂಸ್ಥೆಗಳು ವಿದ್ಯಾರ್ಥಿಗಳಲ್ಲಿ ಸಾಮರ್ಥ್ಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಸಕ್ಷಮವಾಗಬೇಕಿವೆ. ಎಂಥ ಸಾಮರ್ಥ್ಯವೆಂದರೆ ಅದರಿಂದಾಗಿ ವಿದ್ಯಾರ್ಥಿಗಳು ತಮ್ಮ ಕಾರ್ಯಗಳು, ಯೋಚನೆಗಳು ಮತ್ತು ಅವುಗಳಲ್ಲಿ ಅಡಕವಾಗಿರುವ ಅಭಿಪ್ರಾಯಗಳು (ಮಾನ್ಯತೆ) ಹಾಗೂ ಪೂರ್ವಾಗ್ರಹಗಳ ಬಗ್ಗೆ ಆತ್ಮಚಿಂತನೆಯನ್ನು ಮಾಡಲು ಸಾಧ್ಯವಾಗುವಂಥ ಸಾಮರ್ಥ್ಯ. . ತರಗತಿಯಲ್ಲಿ ಸಿಸಿಟಿವಿ ಕ್ಯಾಮರಾ, ಕ್ಯಾಮರಾದ ದೃಷ್ಟಿ ಎಲ್ಲಿಯವರೆವಿಗೆ ಅಧ್ಯಾಪಕರ ಕಡೆಗಿರುವುದೋ ಅಲ್ಲಿಯವರೆವಿಗೆ ಮಾತ್ರ ಅವರು ಜಾಗರೂಕರಾಗಿರುವಂತೆ ಪ್ರೇರಿಸುತ್ತದೆ.

ವಿಮರ್ಶೆ

ಇವರ ಅನುವಾದ ಬಹುಮಟ್ಟಿಗೆ ಸರಿಯಾಗಿದೆ. ಹಿಂದಿಯ ವಾಕ್ಯರಚನೆಯ ಸ್ವರೂಪ ಮತ್ತು ಕನ್ನಡದ ವಾಕ್ಯರಚನೆಯ ಸ್ವರೂಪ ಇವರಿಗೆ ಚೆನ್ನಾಗಿ ತಿಳಿದಿದೆ. ಪ್ರಾರಂಭದ ಎರಡು ಪುಟಗಳಲ್ಲಿ ಅದು ಕಾಣುತ್ತದೆ.(ಮೂಲದ ೮ &೯). ಆದರೆ ಮುಂದಿನ ಎರಡು ಪುಟಗಳನ್ನು ಸರಿಯಾಗಿ ಅನುವಾದ ಮಾಡಲು ಸಾಧ್ಯವಾಗಿಲ್ಲ. ಅದಕ್ಕೆ ಬಹುಶಃ ಮೂಲ ಹಿಂದಿಯ ವಾಕ್ಯಗಳು ತುಂಬ ಉದ್ದುದ್ದನೆಯ ವಾಕ್ಯಗಳಾಗಿದ್ದು ಹಲವು ಸಂಯುಕ್ತ ವಾಚಕಗಳು ಇರುವುದು .ಕಾರಣವಾಗಿದೆ. ಪದಗಳಿಗೆ, ಪದಪುಂಜಗಳಿಗೆ ಅವರು ಬಳಸಿರುವ ಕನ್ನಡ ರೂಪಗಳು ಬಹುಮಟ್ಟಿಗೆ ಸರಿ ಇವೆ. ಆದರೆ ವಾಕ್ಯದಲ್ಲಿ ಸರಿಯಾಗಿ ಜೋಡಿಸಲು ಸಾಧ್ಯವಾಗಿಲ್ಲ. ಅದನ್ನು ಸರಿಪಡಿಸಿಕೊಂಡರೆ ಆಯಿತು.

ಆರ್. ಲಕ್ಷ್ಮೀನಾರಾಯಣ